# ಕಲಿಯಲಾಗದ ಮಕ್ಕಳು

**ಮೊಹಮ್ಮದ್ ಇಸ್ರಾರ್**



ಶಿಕ್ಷಕರು ಮತ್ತು ಮಕ್ಕಳು ಒಂದು ಶಾಲೆಗೆ ಸಂಬಂಧಪಟ್ಟ ಸರಪಳಿಯ ಎರಡು ಮುಖ್ಯ ಕೊಂಡಿಗಳು. ಅವರನ್ನು ನಾವು ಎರಡರಲ್ಲಿ ಯಾವುದಾದರು ಒಂದು ಅನುಕ್ರಮದಲ್ಲಿ ನೋಡಬಹುದು – ಮೊದಲು ಶಿಕ್ಷಕರು ನಂತರ ಮಕ್ಕಳು ಅಥವಾ ಮೊದಲು ಮಕ್ಕಳು ಆನಂತರ ಶಿಕ್ಷಕರು. ಇದು ಹೀಗೇಕೆ ಎಂದರೆ, ಇತ್ತೀಚಿನ ಕೆಲವು ವರ್ಷಗಳವರೆಗೆ ಶಿಕ್ಷಣವು ಶಿಕ್ಷಕ-ಕೇಂದ್ರಿತವಾಗಿತ್ತು; ಈಗ ಅದನ್ನು ವಿದ್ಯಾರ್ಥಿ-ಕೇಂದ್ರಿತವಾಗಿ ಪರಿಗಣಿಸಲಾಗುತ್ತಿದೆ. ಮಕ್ಕಳು ಹೇಗೆ ಕಲಿಯುತ್ತಾರೆ ಎಂಬುದರ ಬಗ್ಗೆ ಹೊಸ ಹೊಸ ಸತ್ಯಾಂಶಗಳು ಬೆಳಕಿಗೆ ಬರುತ್ತಿವೆ ಮತ್ತು ಮಕ್ಕಳು ತಮ್ಮದೇ ಆದ ಜ್ಞಾನವನ್ನು ಕಟ್ಟಿಕೊಳ್ಳುತ್ತಾರೆ ಎಂದೂ ಹೇಳಲಾಗುತ್ತಿದೆ. ಶಿಕ್ಷಕರು ಮಾಡಬೇಕಾದುದಿಷ್ಟೇ, ಮಕ್ಕಳು ಸರಾಗವಾಗಿ ಕಲಿತುಕೊಳ್ಳಲು ಬೇಕಾದ ಸಂದರ್ಭಗಳನ್ನು ರೂಪಿಸಿಕೊಡುವುದು. ಶೈಕ್ಷಣಿಕ ತಜ್ಞರು ಒಂದು ಮಗುವಿನ ಶೇಕಡಾ ೮೦ ರಿಂದ ೯೦ ರಷ್ಟು ಕಲಿಕೆಯು ತನ್ನ ಸುತ್ತಮುತ್ತಲಿನ ಪರಿಸರ ಹಾಗೂ ಮನೆಯ ವಾತಾವರಣದ ಮೂಲಕವೇ ಆಗುತ್ತದೆ ಎನ್ನುತ್ತಾರೆ.

ಈ ವಿಷಯವು ಅನೇಕ ಚರ್ಚೆಗೆ ಎಡೆಮಾಡಿಕೊಡುವಂತಿದ್ದರೂ, ಮಕ್ಕಳು ಶಾಲೆಯಲ್ಲಿ ಏನು ಕಲಿಯುತ್ತಾರೋ ಅದರಲ್ಲಿ ಶಿಕ್ಷಕರು ಬಹಳ ಮುಖ್ಯಪಾತ್ರವಹಿಸುತ್ತಾರೆ ಎಂಬುದನ್ನಂತೂ ತಳ್ಳಿಹಾಕಲು ಸಾಧ್ಯವಿಲ್ಲ. ಮತ್ತು ಶಿಕ್ಷಕರು ಯಾವಾಗಲೂ ತನ್ನ ವಿದ್ಯಾರ್ಥಿಯು ಹಲವು ಕೌಶಲಗಳನ್ನು ಕಲಿತು ಚೆನ್ನಾಗಿ ಸಾಧನೆ ಮಾಡಲಿ ಎಂದೇ ಆಶಿಸುತ್ತಾರೆ. ಆದರೆ ಈ ಬೋಧನೆ-ಕಲಿಕಾ ಪ್ರಕ್ರಿಯೆಯ ಮತ್ತೊಂದು ಅಂಶವೆಂದರೆ ಒಂದು ಮಗುವಿಗೆ ತನ್ನ ಸಮಾಜೋ-ಸಾಂಸ್ಕೃತಿಕ ಹಿನ್ನೆಲೆಯಿಂದ, ಮನೆಯ ವಾತಾವರಣದಿಂದ, ಅವಳ ಅಥವಾ ಅವನನ್ನು ಬೆಳೆಸಿದ ರೀತಿಯಿಂದ, ತಂದೆ ತಾಯಿಗಳ ಸಹಕಾರ ಮತ್ತು ಗೆಳೆಯರೊಡನೆಯ ಚರ್ಚೆಗಳಿಂದ ಎಷ್ಟು ಸಹಾಯ ದೊರಕುತ್ತದೆ ಎಂಬುದಾಗಿದೆ. ಕಲಿಕೆ ಹಾಗೂ ಜ್ಞಾನವನ್ನು ಕಟ್ಟಿಕೊಳ್ಳುವ ಈ ಪ್ರಕ್ರಿಯೆಯಲ್ಲಿ ಶಿಕ್ಷಕರು ವಹಿಸುವ ಪಾತ್ರ ಹಾಗೂ ಸಮಾಜೋ-ಸಾಂಸ್ಕೃತಿಕ, ಕೌಟುಂಬಿಕ ಹಿನ್ನೆಲೆ – ಈ ಎರಡೂ ಅಂಶಗಳು ಮುಖ್ಯಭೂಮಿಕೆಯನ್ನು ನಿರ್ವಹಿಸುತ್ತವೆ. ಅವುಗಳ ಪ್ರಭಾವದ ಮಟ್ಟ ಆಚೆ ಈಚೆಯಾಗಬಹುದು, ಕೆಲವು ಸಂದರ್ಭಗಳಲ್ಲಿ ಎರಡೂ ಸಮ ಪ್ರಮಾಣದಲ್ಲಿ ಪ್ರಭಾವ ಬೀರಬಹುದು. ಈ ಸಂದರ್ಭದ ಕೆಲವು ಮುಖ್ಯ ಅಂಶಗಳಿಗೆ ಒತ್ತು ಕೊಡಲು ನಾನು ಬಯಸುತ್ತೇನೆ. ಇದು ನನ್ನ ವೈಯಕ್ತಿಕ ದೃಷ್ಟಿಕೋನವಾಗಿದ್ದು ನಾನು ಬೆಳೆದುಬಂದ ಸಂದರ್ಭದ ಒಂದು ಚಿಕ್ಕ ಘಟನೆಯ ಆಧಾರದ ಮೇಲೆ ಮುಂದುವರಿಯಲು ಬಯಸುತ್ತೇನೆ.

ನಾನು ಬೆಳೆದದ್ದು ನನ್ನ ತಾಯಿಯ ತಾಯಿಯ ಅಂದರೆ, ಅಜ್ಜಿಯ ಮನೆಯಲ್ಲಿ. ನಾವು ಎಲ್ಲ ಸೇರಿ ಒಟ್ಟು ಹದಿನಾಲ್ಕು ಮಕ್ಕಳಿದ್ದೆವು. ನನ್ನನ್ನು ಬಿಟ್ಟು, ಸಂಬಂಧಿಕರ ಇನ್ನೂ ಎರಡು ಮಕ್ಕಳು ಈ ಕುಟುಂಬದಲ್ಲಿ ಓದಲಿಕ್ಕೆಂದು ಉಳಿದುಕೊಂಡಿದ್ದರು. ನಮ್ಮ ಕುಟುಂಬದ ಹಿರಿಯರೊಳಗೆ – ನನ್ನ ಸೋದರಮಾವ, ಸೋದರತ್ತೆ ಹಾಗೂ ಅಜ್ಜ-ಅಜ್ಜಿಯರೊಳಗೆ (ನಾನಾ -ನಾನಿ )-ಇಷ್ಟು ಮಕ್ಕಳಲ್ಲಿ ಯಾರು ಅತೀ ಬುದ್ಧಿವಂತ, ಅತೀ ಚಾಣಾಕ್ಷ ಹಾಗು ಅತೀ ತಿಳುವಳಿಕೆಯುಳ್ಳ ಮಗು ಎಂಬ ಹೋಲಿಕೆ ಯಾವಾಗಲೂ ಹುಟ್ಟಿಕೊಳ್ಳುತ್ತಿತ್ತು. ಅವರನ್ನು ದೂಷಿಸಿ ಏನೂ ಪ್ರಯೋಜನ ಇಲ್ಲ. ಏಕೆಂದರೆ ನಮ್ಮ ದೇಶದ ಶೈಕ್ಷಣಿಕ ವ್ಯವಸ್ಥೆಯೇ ಶುರುವಿನಿಂದ ಇಂಥ ಹೋಲಿಕೆಗಳ ಮೇಲೆಯೇ ಆಧರಿತವಾಗಿದೆ – ಶಿಕ್ಷಣದ ಸಂದರ್ಭವನ್ನೇ ತೆಗೆದುಕೊಂಡರೆ, ಬಹುತೇಕ ಎಲ್ಲ ಹಂತದಲ್ಲೂ, ಮಕ್ಕಳನ್ನು ಹೋಲಿಕೆ ಮಾಡಲಾಗುತ್ತದೆ. ಇತ್ತೀಚೆಗೆ ಪರಿಸ್ಥಿತಿ ಖಂಡಿತವಾಗಿ ಕೊಂಚವಾದರೂ ಬದಲಾಗಿದೆ ಹಾಗೂ ಪ್ರಾಥಮಿಕ ತರಗತಿಗಳಲ್ಲಿ ಎಲ್ಲ ಮಕ್ಕಳನ್ನೂ ಒಂದೇ ದರ್ಜೆ ಹಾಗೂ ಮಾನದಂಡದಲ್ಲಿ ತೂಗಲಾಗುತ್ತದೆ, ಹಾಗೂ ಅವರೆಲ್ಲ ಒಂದು ತರಗತಿಯಿಂದ ಮತ್ತೊಂದು ತರಗತಿಗೆ ಹೋಗುತ್ತಾರೆ. ಆದರೆ ಅಲ್ಲಿಂದ ಮುಂದೆ, ಪರೀಕ್ಷಾ ವ್ಯವಸ್ಥೆಯ ಮೂಲಕ ಸ್ವಲ್ಪಮಟ್ಟಿಗಿನ ಬದಲಾವಣೆಯಾಗುವುದು ಸಹಜವಾಗಿದೆ.

ನನ್ನ ಅಜ್ಜಿಯ ಪ್ರಕಾರ ನನ್ನ ಚಿಕ್ಕ ಸೋದರ ಮಾವನವರ ನಾಲ್ಕು ಮಕ್ಕಳು ಬಹಳ ಬುದ್ಧಿವಂತರು, ಚಾಣಾಕ್ಷರು ಹಾಗು ತೀಕ್ಷ್ಣಮತಿಗಳು ಆಗಿದ್ದರು. ಅವರ ಬಗ್ಗೆ ಏನಾದರೂ ನನ್ನೊಡನೆ ಹೇಳುವಾಗ ಚಿಕ್ಕವರಿದ್ದಾಗ ಅವರಿಗಿದ್ದ ಬುದ್ಧಿವಂತಿಕೆ ಹಾಗೂ ಕೌಶಲ, ಅದರ ಮೂಲಕ ಅವರ ಕೆಲಸದ ಗುಣಮಟ್ಟದ ಬಗ್ಗೆ ಎಣೆಯಿಲ್ಲದೆ ಹೊಗಳುತ್ತಿದ್ದರು. ನಾನು ನನ್ನ ಅಜ್ಜಿಗೆ ಆಗಾಗ್ಗೆ ಹೇಳುತ್ತಿದ್ದೆ, ಬಾಲ್ಯದಲ್ಲಿ ಪ್ರತೀ ಮಗುವೂ ಬೀರಬಲ್ ನಂತೆಯೇ, ಅವರು ಬೆಳೆದು ದೊಡ್ಡವರಾದಾಗ ಮಾತ್ರ ಅವರ ನಿಜವಾದ ಯೋಗ್ಯತೆ ಬೆಳಕಿಗೆ ಬರುತ್ತದೆ ಎಂದು. ಆಗ ನನಗೆ ಮಕ್ಕಳ ಸ್ವಭಾವದ ಬಗ್ಗೆಯಾಗಲಿ, ಮಕ್ಕಳ ಮನಶಾಸ್ತ್ರದ ಬಗ್ಗೆಯಾಗಲೀ, ಅವರ ಕಲಿಕೆ, ಅರ್ಥಮಾಡಿಕೊಳ್ಳುವಿಕೆ ಈ ಯಾವುದರ ಬಗ್ಗೆಯೂ ಹೆಚ್ಚು ತಿಳಿವಳಿಕೆ ಇರಲಿಲ್ಲ. ಆದರೆ ಮಕ್ಕಳೊಡನೆ ನನಗಾದ ಕೆಲವು ಸಿಹಿಕಹಿ ಅನುಭವಗಳಿಂದ ಒಂದು ಮಗುವು ತಾನೇನು ಮಾಡುತ್ತದೆಯೋ ಅದೇ ಆಗುತ್ತದೆ. ಅದನ್ನು ರೂಪಿಸುವುದರಲ್ಲಿ ಅದರ ಮನೆಯ ಪರಿಸ್ಥಿತಿ ಮತ್ತು ಸಾಮಾಜಿಕ ವಾತಾವರಣಗಳು ಪಾತ್ರವಹಿಸುತ್ತವೆ ಎಂಬುದನ್ನು ಕಂಡುಕೊಂಡೆ.

ಇವೆಲ್ಲವೂ ನನಗೆ ೨೨ ವರ್ಷಗಳ ಅನಂತರ ಇನ್ನೂ ಆಳವಾಗಿ ಅನುಭವಕ್ಕೆ ಬಂತು. ಏಕೆಂದರೆ, ನನ್ನ ಸೋದರ ಮಾವನವರ ನಾಲ್ಕೂ ಮಕ್ಕಳಿಗೆ, ಒಳ್ಳೆಯ ಶಿಕ್ಷಣವನ್ನೇ ಪಡೆದುಕೊಂಡರೂ, ಬಹಳ ಪ್ರಯತ್ನಗಳ ಬಳಿಕವೂ ಅವರ ಶಿಕ್ಷಣಕ್ಕೆ ತಕ್ಕ ಕೆಲಸವೇ ಸಿಗಲಿಲ್ಲ. ಕೊನೆಯಲ್ಲಿ ಅವರಲ್ಲಿ ಇಬ್ಬರು ತಮ್ಮ ಪಿತ್ರಾರ್ಜಿತ ಜಮೀನಿನಲ್ಲಿ ವ್ಯವಸಾಯ ಆರಂಭಿಸಿದರೆ, ಮತ್ತಿಬ್ಬರು ಅಂಗಡಿ ಇಟ್ಟರು. ಇವತ್ತೇನಾದರೂ ನನ್ನ ಅಜ್ಜಿ ಬದುಕಿದ್ದಿದ್ದರೆ ಅವರ ಹಲವು ವಿಚಾರಗಳಿಗೆ ಧಕ್ಕೆ ಬೀಳುತ್ತಿತ್ತು. ಬಹುಶಃ ಅವರು ಆಮಕ್ಕಳಿಗೆ ಕಲಿಸಿದ ಶಿಕ್ಷಕರನ್ನೇ ದೂಷಿಸುತ್ತಿದ್ದರೇನೋ. ಏಕೆಂದರೆ, ನಾವು

ಒಂದೇ ತರಗತಿಯಲ್ಲಿ ಇರಲಿಲ್ಲ ಎನ್ನುವುದನ್ನು ಬಿಟ್ಟರೆ, ಒಂದೇ ಶಾಲೆಯಲ್ಲಿಯೇ ಓದಿದ್ದೆವು ಮತ್ತು ಅದೇ ಶಿಕ್ಷಕರು ನನಗೂ ಕಲಿಸಿದ್ದರು.

ಬಹುದಿನಗಳಿಂದ ಶಿಕ್ಷಕ ವೃತ್ತಿಯಲ್ಲಿ ತೊಡಗಿಕೊಂಡಿರುವ ನನಗೆ ಈಗ ಒಬ್ಬ ಶಿಕ್ಷಕರಿಗೆ ತನ್ನ ತರಗತಿಯ ಯಾವ ಮಗುವು ಕಲಿಯಬಾರದೆಂದಾಗಲೀ, ಓದಿನಲ್ಲಿ ಹಿಂದೆ ಬೀಳಲಿ ಎಂಬ ಭಾವನೆ ಖಂಡಿತ ಇರುವುದಿಲ್ಲ ಎಂಬುದು ಅನುಭವಕ್ಕೆ ಬಂದಿದೆ. ಶಿಕ್ಷಕರು ಸರಿಸುಮಾರು ೩೦ ಮಕ್ಕಳಿರುವ ಒಂದು ತರಗತಿಗೆ ಸರಿಹೊಂದುವಂತೆ ಒಂದು ಪರಿಣಾಮಕಾರೀ ಕಲಿಕಾ ಯೋಜನೆಯನ್ನು ಸಿದ್ಧಪಡಿಸಿರುತ್ತಾರೆ. ವಿವಿಧ ಚಟುವಟಿಕೆಗಳ ಮೂಲಕ ಆ ವಿಷಯವನ್ನು ಮಕ್ಕಳಿಗೆ ತಲಪಿಸುವ ಪ್ರಯತ್ನ ಮಾಡುತ್ತಾರೆ. ನಿಶ್ಚಿತವಾಗಿಯೂ ಪ್ರತೀಸಂಭಾವ್ಯ ಕ್ರಿಯೆಯನ್ನೂ ಯಶಸ್ವಿಯಾಗಲೆಂದೇ ಕೈಗೊಳ್ಳುತ್ತಾರೆ. ಆದರೂ ಕೆಲವು ಮಕ್ಕಳು ಹಿಂದೆ ಬಿದ್ದುಬಿಡುತ್ತಾರೆ – ಕೆಲವರು ಸದಾ ಆ ಮಟ್ಟದಲ್ಲೇ ಇದ್ದು ಬಿಡುತ್ತಾರೆ. ಈಗ, ಮೂವತ್ತು ಮಕ್ಕಳಿರುವ ಒಂದು ತರಗತಿಯಲ್ಲಿ ಐದರಿಂದ ಏಳು ಮಕ್ಕಳು ಓದಿನಲ್ಲಿ ಹಿಂದೆ ಬಿದ್ದರೆ ಅಥವಾ ಕಲಿಯಲು ಕಷ್ಟಪಟ್ಟರೆ, ಬರಿಯ ಶಿಕ್ಷಕರನ್ನಷ್ಟೇ ಏಕೆ ದೂರಬೇಕು? ಬೋಧನೆ ಯೋಜನೆಯಲ್ಲೇ ತಪ್ಪಿದ್ದಿದ್ದರೆ, ಮೂವತ್ತು ಮಕ್ಕಳಲ್ಲಿ ಇಪ್ಪತ್ತು ಮಕ್ಕಳಿಗೆ ಕೂಡ ಕಲಿಯಲು ಅಸಾಧ್ಯವಾಗಬೇಕಿತ್ತು – ಅಥವಾ ಆ ಪ್ರಮಾಣ ಬಹಳ ಕಮ್ಮಿ ಇರಬೇಕಿತ್ತು. ಬಹಳ ಕಷ್ಟಪಟ್ಟು ಕೆಲಸ ಮಾಡುವ, ಪ್ರಾಮಾಣಿಕ ಹಾಗೂ ಜಾಗರೂಕರಾದ ಶಿಕ್ಷಕರು ಇರುವಂತಹ ತರಗತಿಗಳಲ್ಲಿಯೂ ಇಂಥ ಉದಾಹರಣೆಗಳನ್ನು ನಾನು ನೋಡಿದ್ದೇನೆ .

ವಿವಿಧ ಶಿಕ್ಷಣ ತಜ್ಞರು, ಶಿಕ್ಷಕ ತರಬೇತುದಾರರು ಹಾಗು ಶಿಕ್ಷಕ-ಶಿಕ್ಷಣದ ಮೇಲೆ ಕೆಲಸ ಮಾಡುತ್ತಿರುವ ಎಷ್ಟೋ ಜನರು ಇಂಥ ನಿಧಾನಗತಿಯ ಕಲಿಕೆಯುಳ್ಳ, ಕಲಿಯಲಾಗದ ಮಕ್ಕಳ ಉದಾಹರಣೆಯನ್ನು ಕೊಟ್ಟು ಅಷ್ಟೂ ದೋಷವನ್ನು ಶಿಕ್ಷಕರ ಮೇಲೇ ಹೊರಿಸಿಬಿಡುತ್ತಾರೆ. ಶಿಕ್ಷಕರ ಬೋಧನಾ ವಿಧಾನಗಳ ಬಗ್ಗೆಯೂ ಪ್ರಶ್ನೆ ಎತ್ತಲಾಗುತ್ತದೆ. ಬೇರೆ ರೀತಿಯಲ್ಲಿ ಬೋಧನೆ ಮಾಡುವ ಬಗ್ಗೆ, ಕಲಿಸುವಾಗ ಬೇರೆ ಬೇರೆ ಸಿದ್ಧಾಂತಗಳನ್ನು ಮತ್ತು ಬೋಧನಾ ತತ್ತ್ವಗಳನ್ನೂ ಅಳವಡಿಸಿಕೊಳ್ಳುವ ಬಗ್ಗೆ ಉಪದೇಶಗಳನ್ನು ನೀಡಲಾಗುತ್ತದೆ. ಪ್ರತಿಯೊಬ್ಬ ಶಿಕ್ಷಕರೂ ಪಾಠಮಾಡುತ್ತಲೇ ಅಳವಡಿಸಿಕೊಂಡ ತಮ್ಮದೇ ಆದ ಬೋಧನಾ ವಿಧಾನ ಹಾಗೂ ಶೈಲಿ ಹೊಂದಿದ್ದಾರೆ ಎಂಬ ವಿಷಯವನ್ನು ಅವರೆಲ್ಲ ಕಡೆಗಣಿಸಿ ಬಿಡುತ್ತಾರೆ.

ಮೇಲೆ ಸೂಚಿಸಿದಂತೆ, ಮಗುವಿನ ಸಾಮಾಜಿಕ ವಾತಾವರಣ, ಮನೆಯ ವಾತಾವರಣ, ತಂದೆ ತಾಯಿಯರ ನಡುವಿನ ಜಗಳ, ಮಕ್ಕಳಿಗೆ ಸಿಗದ ಸಹಕಾರ, ಗೆಳೆಯರ ಸಾಂಗತ್ಯ ಇಂಥ ಹತ್ತು ಹಲವು ಕಾರಣಗಳು ಕೂಡ ಮಗುವಿನ ಕಲಿಕೆಯ ಪ್ರಕ್ರಿಯೆಯಲ್ಲಿ ತಡೆಯೊಡ್ಡುವ ಸಾಧ್ಯತೆ ಇರುತ್ತದೆ. ಒಂದು ನಿರ್ದಿಷ್ಟ ವಿಷಯದ ಮೇಲೆ ಮಗುವಿಗಿರುವ ಆಸಕ್ತಿ ಹಾಗೂ ಒಲವು ಕೂಡ ಆ ಮಗುವಿನ ಕಲಿಕೆಯ ಕ್ಷಮತೆಯ ಮೇಲೆ ಪ್ರಭಾವ ಬೀರುವ ಅಂಶಗಳಾಗಿವೆ. ಒಂದು ಮಗು ಒಂದು ವಿಷಯ ಅಥವಾ ಚಟುವಟಿಕೆಯನ್ನು ಕಲಿಯಲು ಎಷ್ಟು ಉತ್ಸುಕವಾಗಿದೆ ಎಂಬುದನ್ನೂ ಪರಿಗಣಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ, ಬಾಗೇಶ್ವರದ (ಉತ್ತರಾಖಂಡ ) ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯಲ್ಲಿನ ಅಧ್ಯಾಪಕರಾದ ಡಾ.ಕೇವಲಾನಂದ್ಕಂದಪಾಲ್ ಅವರು ಶೈಕ್ಷಿಕ್ದಾಖಲ್ (ವರ್ಷ ೬, ಸಂಪುಟ ಜುಲೈ ೧೦-೨೦೦೭) ಎಂಬ ನಿಯತಕಾಲಿಕೆಯಲ್ಲಿ 'ಬೋಧನೆ-ಕಲಿಕೆ ಪ್ರಕ್ರಿಯೆಗಳ ಮಾದರಿ' ಎಂಬ ಲೇಖನವೊಂದರಲ್ಲಿ ಹೀಗೆ ಹೇಳುತ್ತಾರೆ, "ಕಲಿಯುವುದು ಒಂದು ವೈಯಕ್ತಿಕ ಹಾಗು ವ್ಯಕ್ತಿನಿಷ್ಠ ಅನುಭವ, ಮಾನದಂಡದ ಹೆಸರಿನಲ್ಲಿ ಶಾಲೆಗಳು ವಸ್ತು ನಿಷ್ಠತೆಯನ್ನು ತೂರಿಸಲು ಪ್ರಯತ್ನಿಸುತ್ತವೆ. ಇದು ಮಕ್ಕಳು ಜ್ಞಾನ -ನಿರ್ಮಾಣದಲ್ಲಿ ಭಾಗವಹಿಸುವುದರ ಮೇಲೆ ಪರಿಣಾಮ ಬೀರುತ್ತದೆ. ತರಗತಿಯಲ್ಲಿ ಬೋಧನೆ-ಕಲಿಕೆ ಪ್ರಕ್ರಿಯೆಯಲ್ಲಿ ಎರಡು ಮುಖ್ಯ ಭಾಗಗಳಿವೆ. ಮೊದಲನೆಯದು ಬೋಧನೆ ಮೂಲಕ ಕಲಿಯುವುದು, ಮತ್ತು ಎರಡನೆಯದು ಅಭ್ಯಾಸಗಳ ಮೂಲಕ ಕೌಶಲಗಳನ್ನು ಕಲಿತು ಅದನ್ನು ಬಲಪಡಿಸಿಕೊಳ್ಳುವುದು. ಮೊದಲನೆಯ ಭಾಗ ಶಿಕ್ಷಕರ ಕೆಲಸದಡಿ ಬರುತ್ತದೆ ಮತ್ತು ಎರಡನೆಯ ಭಾಗ ವಿದ್ಯಾರ್ಥಿಯ ಶ್ರಮದ ಮೇಲೆ ಅವಲಂಬಿತವಾಗಿರುತ್ತದೆ."

ಆದ್ದರಿಂದ ಬೋಧನೆ-ಕಲಿಕೆ ಪ್ರಕ್ರಿಯೆಯಲ್ಲಿ ಒಂದು ವಿಷಯವಂತೂ ಸ್ಪಷ್ಟವಾಗಿದೆ, ಶಿಕ್ಷಕರ ಭಾಗವಹಿಸುವಿಕೆ ಎಷ್ಟು ಮುಖ್ಯವೋ ಅಷ್ಟೇ ಪ್ರಾಮುಖ್ಯ ವಿದ್ಯಾರ್ಥಿಗಳ ಭಾಗವಹಿಸುವಿಕೆಗೂ ಇದೆ. ಇದರಲ್ಲೊಂದು ಸರಿಯಿಲ್ಲ ಎಂದರೂ ವ್ಯತಿರಿಕ್ತ ಫಲಿತಾಂಶ ಬರುತ್ತದೆ. ಬರುವುದು ಸಹಜ. ಸಂತ ಕಬೀರರು ಇದೆ ವಿಷಯವನ್ನು ಸೂಚಿಸುತ್ತ ಹೇಳುತ್ತಾರೆ – ಗುರು ಬಿಚಾರಾ ಕ್ಯಾ ಕರೇ, ಜಬ್ ಸೀಖ್ನಿ ಮಹಿಂ ಭೂಕ್ / ಭಾವೇತ್ಯೋಂ ಪರ್ಬೋಧಿಯೇ, ಬಾನ್ಸ್ ಬಜಾಯೇ ಫೂನ್ಕ್' (ಪಾಪ ಬಡ ಶಿಕ್ಷಕ ಏನು ಮಾಡಿಯಾನು, ಕಲಿಯುವವನಲ್ಲೇ ದೋಷವಿದ್ದರೆ /ಕೊಳಲೇನು ಮಾಡೀತು ಎಷ್ಟು ಊದಿದರೂ ಬರಿಯ ಗಾಳಿ ಹೊರಬಂದರೆ). ಒಂದು ಮಗುವಿನ ಕಲಿಕೆಯಲ್ಲಿ ಒಬ್ಬ ಶಿಕ್ಷಕರ ಬೋಧನಾ ವಿಧಾನ ಬಹಳ ಮುಖ್ಯ ಎಂದು ನಾನು ನಂಬುತ್ತೇನೆ. ಹಾಗಾಗಿ ಒಬ್ಬ ಶಿಕ್ಷಕನು / ಶಿಕ್ಷಕಿಯು ನಿರಂತರವಾಗಿ ತಮ್ಮ ಬೋಧನಾ ವಿಧಾನಗಳನ್ನು ವಿಮರ್ಶೆಗೊಳಪಡಿಸಬೇಕಾಗುತ್ತದೆ ಹಾಗೂ ಬೋಧನೆ-ಕಲಿಕೆಯ ವಿನೂತನ ವಿಧಾನಗಳು ಮತ್ತು ತತ್ತ್ವಗಳ ಬಗ್ಗೆಯೂ ತಿಳಿವಳಿಕೆ ಹೊಂದಿರಬೇಕಾಗುತ್ತದೆ.

ಉಧಮ್ ಸಿಂಗ್ ನಗರದ ಅಜೀಂ ಪ್ರೇಮ್ ಜಿ ಶಾಲೆಯಲ್ಲಿ ಮೂರು ತಿಂಗಳುಗಳ ಕಾಲ ಶಿಕ್ಷಕನಾಗಿ ದುಡಿದ ಅನಂತರ, ನನಗೂ ಮಕ್ಕಳ ಕಲಿಯುವಿಕೆಯ ಬಗ್ಗೆ ಕೊಂಚ ಅನುಭವವಾಯಿತು. ಮಕ್ಕಳು ಹಾಗೂ ಶಿಕ್ಷಕರ ನಡುವಿನ ಮಾತುಕತೆ, ತರಗತಿಯ ಶಿಕ್ಷಣದ ಬಗ್ಗೆ ಇರುವ ಒಲವು, ಶಾಲೆಯಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಉಪಸ್ಥಿತಿಯಂಥ ಹಲವು ವಿಷಯಗಳನ್ನು ಗ್ರಹಿಸಿದಾಗ ನನಗೆ ಕಂಡುಬಂದ ವಿಷಯವೇನೆಂದರೆ, ಒಂದು ವರ್ಷದ ೩೬೫ ದಿನಗಳಲ್ಲಿ ಕೇವಲ ೨೦೦ ದಿನ ಮಾತ್ರ- ಅಥವಾ ಅದಕ್ಕೂ ಕಮ್ಮಿ- ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಒಬ್ಬರಿಗೊಬ್ಬರ ಅಥವಾ ಶಾಲೆಯ ಸಂಪರ್ಕದಲ್ಲಿರುತ್ತಾರೆ. ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಒಂದು ದಿನಕ್ಕೆ ಸರಾಸರಿ ಮೂರರಿಂದ ಮೂರುವರೆ ತಾಸುಗಳ ಅವಧಿ ಮಾತ್ರ ಒಟ್ಟಿಗಿರುತ್ತಾರೆ. ಮತ್ತು ಈ ಅವಧಿಯಲ್ಲಿಯೂ, ಬೇರೆ ಬೇರೆ ಕಾಲಾವಧಿಯಲ್ಲಿ ಬೇರೆ ಬೇರೆ ಶಿಕ್ಷಕರು ವಿದ್ಯಾರ್ಥಿಗಳೊಡನೆ ಸಂವಹಿಸುತ್ತಾರೆ. ಪ್ರತೀ ಶಿಕ್ಷಕರು ವಿದ್ಯಾರ್ಥಿಗಳೊಡನೆ ಮಾತನಾಡುವ ಹಾಗೂ ಸಂವಹಿಸುವ ರೀತಿ ಕೂಡ ವಿಭಿನ್ನವಾಗಿರುತ್ತದೆ. ಮಕ್ಕಳೊಡನೆ ಇಷ್ಟು ಸಣ್ಣ ಕಾಲಾವಕಾಶ ಕಳೆಯುವಾಗ ಒಂದು

ಮಗು ಯೋಚನಾಶೀಲ, ಜಾಗರೂಕ ಹಾಗು ಸೃಷ್ಟಿಶೀಲ ಪ್ರಜೆಯಾಗಬೇಕೆಂಬ ನಮ್ಮ ಆಸೆ ಆಕಾಂಕ್ಷೆಗಳನ್ನು ಹೇಗೆ ಪೋಷಿಸುವುದು? ಮತ್ತು ಕೆಲವೊಮ್ಮೆ ನನಗೆ ಶಿಕ್ಷಕರು ಕಲಿಸುವುದರ ಜೊತೆಗೆ ಶಾಲೆಗೆ ಸಂಬಂಧಪಟ್ಟ ಅಸಂಖ್ಯ ಇತರ ಕೆಲಸಗಳನ್ನು ನಿರ್ವಹಿಸಬೇಕಾಗುತ್ತದೆ ಎನ್ನಿಸುತ್ತದೆ. ಇದರಿಂದಾಗಿ ಆಶಿಕ್ಷಕರು ಪರಿಣಾಮಕಾರಿಯಾದ ಬೋಧನೆ –ಕಲಿಕೆ ಯೋಜನೆಯೊಂದನ್ನು ಸಿದ್ಧಪಡಿಸಿದರೂ, ಅದಕ್ಕೆ ಎಷ್ಟು ಆಸಕ್ತಿ ತೋರಿಸಬೇಕೋ, ಅದಕ್ಕೋಸ್ಕರ ಎಷ್ಟರಮಟ್ಟಿಗೆ ದುಡಿಯಬೇಕೋ ಅಷ್ಟು ಮಾಡಲಾಗದೆ ಹೋಗುತ್ತಾರೆ. ಅವರಿಗೆ ತನ್ನ ಸಂಯಮವನ್ನು ಕಾದು ಕೊಳ್ಳಲು ಆಗುವುದಿಲ್ಲ, ಒಂದು ರೀತಿಯ ನಿರುತ್ಸಾಹದ ಮನಸ್ಥಿತಿಯಲ್ಲಿ ಕೆಲಸ ಮಾಡಬೇಕಾಗಿಬರುತ್ತದೆ. ಈ ವಿಚಾರದ ಬಗ್ಗೆ ನಾನು ಯಾವ ಶಿಕ್ಷಣ ತಜ್ಞರಲ್ಲಿ ಮಾತನಾಡಿದರೂ, ಅದು ಶಿಕ್ಷಣಕ್ಕೆ ಸಂಬಂಧಪಟ್ಟಿದ್ದೆ ಅಲ್ಲ ಎನ್ನುವಂತೆ ಅವರು ಉದಾಸೀನ ಮಾಡುತ್ತಾರೆ. ಈ ಸಮಸ್ಯೆಯು ಶಿಕ್ಷಕರು, ಶಿಕ್ಷಣ ಹಾಗೂ ವಿದ್ಯಾರ್ಥಿಗಳಿಗೆ ಸಂಬಂಧಪಡುತ್ತಿರುವಾಗ, ಅದನ್ನೊಂದು ಶಿಕ್ಷಣದಿಂದ ಬೇರೆಯೇ ವಿಷಯವಾಗಿ ಏಕೆ ನೋಡಬೇಕು? ಇದೂ ಕೂಡ ಮಕ್ಕಳ ಬೋಧನೆ –ಕಲಿಕೆಯ ಮೇಲೆ ಕೊಂಚವಾದರೂ ಪ್ರಭಾವ ಬೀರಿರಲೇಬೇಕು. ಏಕೆಂದು ನನಗೆ ಗೊತ್ತಿಲ್ಲ. ಆದರೆ ನನ್ನ ಮನಸ್ಸಿನಲ್ಲಿ ಒಂದು ವಿಷಯ ನಾಟಿ ಹೋಗಿದೆ. ಅದೇನೆಂದರೆ, ನಾವು ನಮ್ಮ ಮಕ್ಕಳ ಪ್ರಗತಿಯನ್ನು ವಿದೇಶೀ ವಿದ್ವಾಂಸರುಗಳ, ಶಿಕ್ಷಣ ತಜ್ಞರ ಹಾಗೂ ಮನಶಾಸ್ತ್ರಜ್ಞರ ವಿಚಾರಗಳ ಮೂಲಕವೇ ನೋಡಲು ಪ್ರಯತ್ನಿಸುತ್ತೇವೆ. ನಾವು ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಇಂಗ್ಲೆಂಡ್, ಅಮೆರಿಕ ಹಾಗು ಫಿನ್ಲ್ಯಾಂಡ್ನಲ್ಲಿನ ಶಿಕ್ಷಣ ವ್ಯವಸ್ಥೆಗಳಿಗೆ ಹೋಲಿಸಿಕೊಂಡು ಅಲ್ಲಿನ ವಿಧಾನಗಳನ್ನು, ಕಾರ್ಯವೈಖರಿಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ನಾವು ನಮ್ಮ ಮಕ್ಕಳ ಸಮಾಜೋ–ಸಾಂಸ್ಕೃತಿಕ ಪ್ರಗತಿ, ಕಲಿಯುವಿಕೆ ಹಾಗು ತಿಳಿವಳಿಕೆ ಅಂಥ ದೇಶಗಳ ವಿದ್ವಾಂಸರ ವಿಚಾರಗಳ ಹಿನ್ನೆಲೆಯಲ್ಲಿ ಉಂಟಾಗಬೇಕೆಂದು ಬಯಸುತ್ತೇವೆ. ಅಂಥ ದೇಶಗಳಿಂದ ಬರುವ ವಿಚಾರಗಳ ಬೀಜಗಳು ಮೊಳಕೆಯೂರಲು ನಮ್ಮ ದೇಶದ ಪರಿಸ್ಥಿತಿ, ನಮ್ಮ ಶಿಕ್ಷಣದ ನೆಲ ಸಾಂಸ್ಕೃತಿಕವಾಗಿ ಬಹಳ ವಿಭಿನ್ನವಾಗಿದ್ದರೂ ಸಹ ನಾವು ಅದನ್ನೇ ಯೋಚಿಸುತ್ತೇವೆ, ಅದನ್ನೇ ಆಶಿಸುತ್ತೇವೆ.

---

**ಮೊಹಮ್ಮದ್ ಇಸ್ರಾರ್:** ಇವರು ಪ್ರಸ್ತುತ ಉತ್ತರಾಖಂಡದ, ಉಧಮ್ ಸಿಂಗ್ ನಗರದ, ದಿನೇಶಪುರದಲ್ಲಿರುವ ಅಜೀಂ ಪ್ರೇಮ್ ಜಿ ಶಾಲೆಯಲ್ಲಿ ಹಿಂದಿ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದಕ್ಕೂ ಮುಂಚೆ, ಇವರು ಅಜೀಂ ಪ್ರೇಮ್ ಜಿ ಫೌಂಡೇಶನ್ನಲ್ಲಿ ಎರಡೂವರೆ ವರ್ಷಗಳ ಕಾಲ ಭಾಷಾ ಸಂಪನ್ಮೂಲ ವ್ಯಕ್ತಿಯಾಗಿ ಕೆಲಸ ಮಾಡಿದ್ದಾರೆ. ಇವರಿಗೆ ವಿವಿಧ ವಯಸ್ಸಿನ ಹಾಗೂ ತರಗತಿಯ ಮಕ್ಕಳೊಡನೆ ಹದಿನಾಲ್ಕು ವರ್ಷಗಳಿಗೂ ಹೆಚ್ಚು ಕಾಲ ಕೆಲಸ ಮಾಡಿದ ಅನುಭವ ಇದೆ. ಇವರು ಹಿಂದಿ ಹಾಗೂ ಸಂಸ್ಕೃತದಲ್ಲಿ ಎಂ.ಎ. ಪದವೀಧರರಾಗಿದ್ದು, ಪಿಎಚ್.ಡಿ., ಪದವಿಯನ್ನೂ ಪಡೆದಿದ್ದಾರೆ. ಇವರಿಗೆ ಕಥೆ ಬರೆಯುವುದರಲ್ಲಿ ಆಸಕ್ತಿಯಿದೆ. ಇವರ ಸಂಪರ್ಕಕ್ಕೆ: mohd.israr@azimpremjifoundation.org